# <u>ಕರ್ನಾಟಕ ವಿಧಾನ ಪರಿಷತ್ತು</u>

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 545 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು) |
| 3. | ಉತ್ತರಿಸಬೇಕಾದ ದಿನಾಂಕ | **09/03/2020** |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಾರ್ಮಿಕ ಇಲಾಖೆಯಿಂದ ಪ್ರಸ್ತುತ ಜಾರಿ ಮಾಡಲಾಗುತ್ತಿರುವ ರಾಜ್ಯ ಮತ್ತು ಕೇಂದ್ರ ಸರ್ಕಾರದ ಯೋಜನೆಗಳು ಯಾವುವು; | ಕಾರ್ಮಿಕ ಇಲಾಖೆಯು ವಿವಿಧ ಕಾರ್ಮಿಕ ಕಾಯ್ದೆಗಳನ್ನು ಜಾರಿಗೊಳಿಸುತ್ತಿದ್ದು ಆ ಮೂಲಕ ಕಾರ್ಮಿಕರಿಗೆ ಶಾಸನಾತ್ಮಕ ಸೌಲಭ್ಯಗಳನ್ನು ಒದಗಿಸುತ್ತಿದೆ. ಪ್ರಮುಖವಾಗಿ ಕನಿಷ್ಠ ವೇತನವನ್ನು 82 ಅನುಸೂಚಿತ ಉದ್ದಿಮೆಗಳಿಗೆ ನಿಗಧಿಗೊಳಿಸಿ ಕಾಲಕಾಲಕ್ಕೆ ಪರಿಷ್ಕರಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಹಾಗೆಯೇ ಇಲಾಖೆಯ ಅಧೀನದಲ್ಲಿ ಈ ಕೆಳಗಿನ 3 ಮಂಡಳಿಗಳು ಕಾರ್ಯನಿರ್ವಹಿಸುತ್ತಿದ್ದು, ಅವುಗಳ ಮೂಲಕ ಕಾರ್ಮಿಕರ ಕಲ್ಯಾಣಕ್ಕಾಗಿ ಈ ಕೆಳಗಿನಂತೆ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ.<br><br>1] <u>ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ</u><br>2] <u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ</u><br>3] <u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ</u><br><br><u>1. ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ</u><br>ಈ ಮಂಡಳಿಯ ವತಿಯಿಂದ ಅಸಂಘಟಿತ ವಲಯಕ್ಕೆ ಸೇರಿದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗೆ 19 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡಲಾಗುತ್ತಿದೆ. ವಿವರವನ್ನು ಅನುಬಂಧ-1 ರಲ್ಲಿ ಒದಗಿಸಿದೆ. |

| | | |
|---|---|---|
| | | **2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br>ಈ ಮಂಡಳಿಯ ಮೂಲಕ ಅಸಂಘಟಿತ ವಲಯಕ್ಕೆ ಸೇರಿದ ಕಾರ್ಮಿಕರಿಗೆ ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಅನುಷ್ಠಾನಗೊಳಿಸುತ್ತಿರುವ ಯೋಜನೆ / ಸೌಲಭ್ಯಗಳ ವಿವರಗಳು ಈ ಕೆಳಕಂಡಂತಿವೆ.<br><br>(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:- ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರಿಗೆ ಸಂಬಂಧಪಟ್ಟಂತೆ ಯೋಜನೆಯಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>(ಅ) ಅಪಘಾತ ಪರಿಹಾರ:- ಅಪಘಾತದಿಂದಾದ ಮರಣ ಪ್ರಕರಣಗಳಲ್ಲಿ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷದ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೂ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುವುದು.<br>(ಆ) ಶೈಕ್ಷಣಿಕ ಧನ ಸಹಾಯ:- ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ 10,000/- ರೂ.ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.<br>(ಇ) "ಸ್ಮಾರ್ಟ್ ಕಾರ್ಡ್":- ಯೋಜನೆಯಡಿ ಖಾಸಗಿ ವಾಣಿಜ್ಯ ವಾಹನ ಚಾಲಕರಿಗೆ "ಸ್ಮಾರ್ಟ್ ಕಾರ್ಡ್" ನೀಡಲಾಗುತ್ತಿದೆ.<br>(ಈ) ಶ್ರಮ ಸಮ್ಮಾನ ಪ್ರಶಸ್ತಿ :<br>➢ ಪ್ರಸಕ್ತ ಸಾಲಿನಲ್ಲಿ, ಸರ್ಕಾರದ ಆದೇಶದಂತೆ, 2020ರ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, ಉತ್ತಮ ಹಾಗೂ ಸುರಕ್ಷತಾ ಚಾಲನೆ ಮಾಡಿದ ತ್ರಿಚಕ್ರ ಹಾಗೂ ನಾಲ್ಕು ಚಕ್ರದ ವಾಹನ ಚಾಲಕರಿಗೆ ಪ್ರತಿ ಜಿಲ್ಲೆಗೆ ಪ್ರತ್ಯೇಕವಾಗಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ |

ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು ರಾಜ್ಯಾದ್ಯಂತ 660 ಚಾಲಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.

- ಪ್ರಥಮ ಪ್ರಶಸ್ತಿಯು ರೂ. 15,000ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ. 10,000ದ ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ. 8,000ದ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ ಹಾಗೂ ಪ್ರಶಂಸಾಪತ್ರವನ್ನು ಹೊಂದಿರುತ್ತದೆ.

(ಉ) **ಅಪಘಾತ ಜೀವ ರಕ್ಷಕ:-** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಟಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ.

**(2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**

(ಅ) **"ಸ್ಮಾರ್ಟ್ ಕಾರ್ಡ್":-** ಯೋಜನೆಯಡಿ 11 ಅಸಂಘಟಿತ ವಲಯಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.

(ಆ) **ಶ್ರಮ ಸಮ್ಮಾನ ಪ್ರಶಸ್ತಿ:**

- ಪ್ರಸಕ್ತ ಸಾಲಿನಲ್ಲಿ, ಸರ್ಕಾರದ ಆದೇಶದಂತೆ, 2020ರ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, 11 ಅಸಂಘಟಿತ ವಲಯಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ" ವಲಯಗಳಲ್ಲಿ ವಿಶೇಷ ಸಾಧನೆ ಮಾಡಿದ ಕಾರ್ಮಿಕರನ್ನು ಗುರುತಿಸಿ, ಪ್ರತಿಯೊಂದು ಜಿಲ್ಲೆಗೆ ಪ್ರತಿಯೊಂದು ವಲಯಕ್ಕೆ

| | | |
|---|---|---|
| | | ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು 3630 ಕಾರ್ಮಿಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.<br><br>➢ ಪ್ರಥಮ ಪ್ರಶಸ್ತಿಯು ರೂ. 15,000ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ. 10,000ದ ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ. 8,000ದ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/–ಗಳ ನಗದು ಬಹುಮಾನ ಹಾಗೂ ಪ್ರಶಂಸಾಪತ್ರವನ್ನು ಹೊಂದಿರುತ್ತದೆ.<br><br>(ಇ) ಕಾರ್ಮಿಕ ಸೇವಾ ಕೇಂದ್ರ :–<br><br>➢ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 9ರನ್ವಯ ಫಲಾನುಭವಿಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಲಭ್ಯವಿರುವ ಎಲ್ಲಾ ಯೋಜನೆಗಳ ಕುರಿತು ಮಾಹಿತಿ ನೀಡಲು, ಯೋಜನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಅವಶ್ಯಕವಿರುವ ದಾಖಲಾತಿಗಳನ್ನು ಸಿದ್ಧಪಡಿಸಲು ಹಾಗೂ ನಿಗಧಿಪಡಿಸಿದ ಅರ್ಜಿ ನಮೂನೆಗಳನ್ನು ಭರ್ತಿ ಮಾಡಿ ಸಂಬಂಧಪಟ್ಟವರಿಗೆ ರವಾನಿಸಲು ಸಹಾಯವಾಗುವಂತೆ ರಾಜ್ಯದ ಎಲ್ಲಾ 175 ತಾಲ್ಲೂಕುಗಳಲ್ಲಿ ತಲಾ ಒಂದರಂತೆ ಕಾರ್ಮಿಕ ಸೇವಾ ಕೇಂದ್ರಗಳನ್ನು ಹಾಗೂ ಬೆಂಗಳೂರು ವ್ಯಾಪ್ತಿಯಲ್ಲಿ 6 ಕಾರ್ಮಿಕ ಸೇವಾ ಕೇಂದ್ರಗಳು ಸೇರಿ ಒಟ್ಟು 181 ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲು ನಿರ್ಣಯಿಸಿದ್ದು, ಈಗಾಗಲೇ 159 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.<br><br>➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿಗಳು ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಕುರಿತು ಮಾಹಿತಿ, ಸಹಾಯ ಹಾಗೂ ಸೌಲಭ್ಯಗಳನ್ನು, ಸದರಿ ಸೇವಾ ಕೇಂದ್ರಗಳಲ್ಲಿ ಕಾರ್ಮಿಕ ಬಂಧುಗಳ ಮೂಲಕ ಪಡೆಯಲು ವ್ಯವಸ್ಥೆ ಮಾಡಲಾಗುತ್ತಿದೆ. |

(3) **(ಅ)ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ-ಎಸ್‌ವೈಎಂ):-** ಕೇಂದ್ರ ಸರ್ಕಾರದ ಈ ಯೋಜನೆಯಡಿ 18 – 40 ವರ್ಷ ವಯೋಮಾನದ ಅಸಂಘಟಿತ ಕಾರ್ಮಿಕರು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ಕೇಂದ್ರ ಸರ್ಕಾರವು ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ.

**(ಆ) ಎನ್.ಪಿ. ಎಸ್ ಫಾರ್ ಟ್ರೇಡರ್ಸ್ ಯೋಜನೆ:-** ಕೇಂದ್ರ ಸರ್ಕಾರದ ಈ ಯೋಜನೆಯಡಿ 18–40 ವರ್ಷ ವಯೋಮಾನದ ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು ನೋಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ಕೇಂದ್ರ ಸರ್ಕಾರವು ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ.

(4) **ಆಶಾದೀಪ ಯೋಜನೆ:-**

ಕರ್ನಾಟಕ ರಾಜ್ಯ ಸರ್ಕಾರವು ಖಾಸಗಿ ಉದ್ಯೋಗಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ನೇಮಕಾತಿಯನ್ನು ಉತ್ತೇಜಿಸಲು "ಆಶಾದೀಪ ಯೋಜನೆ"ಯನ್ನು ರೂಪಿಸಿದ್ದು, ಪ್ರಸಕ್ತ ಸಾಲಿನಿಂದ ಕರ್ನಾಟಕ ರಾಜ್ಯ ಕಾರ್ಮಿಕರ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ (ಆಶಾದೀಪ ಯೋಜನೆ) ಸೊಸೈಟಿಯ ಮುಖಾಂತರ ಜಾರಿಗೊಳಿಸುತ್ತಿದೆ. ಈ ಯೋಜನೆಯಡಿ ದೊರಕುವ ಸೌಲಭ್ಯಗಳು ಕೆಳಗಿನಂತಿವೆ.

**(ಅ)ಮಾಲೀಕರ ಪಾಲಿನ ಇಎಸ್ಐ ಮತ್ತು ಇಪಿಎಫ್ ವಂತಿಕೆ ಮರುಪಾವತಿ:--**

ಖಾಸಗಿ ವಲಯದ ಸಂಸ್ಥೆಗಳಲ್ಲಿ ಪ್ರಪಥಮವಾಗಿ ಉದ್ಯೋಗಕ್ಕೆ ನೇಮಿಸಿಕೊಂಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮಾಲೀಕರು/ಉದ್ಯೋಗದಾತರು ಕಡ್ಡಾಯವಾಗಿ ಪಾವತಿಸಿದ ಶಾಸನಬದ್ಧ ಭವಿಷ್ಯನಿಧಿ ಹಾಗೂ ಇ.ಎಸ್.ಐ. ವಂತಿಕೆಯನ್ನು ರಾಜ್ಯ ಸರ್ಕಾರದಿಂದ ಮಾಲೀಕರು/ ಉದ್ಯೋಗದಾತರಿಗೆ ಮಾಸಿಕ ಗರಿಷ್ಠ ತಲಾ ರೂ.3000/--ಗಳ ಮಿತಿಯೊಳಗೆ ಮರುಪಾವತಿಸಲಾಗುತ್ತಿದೆ.

**(ಆ) ಅಪ್ರೆಂಟಿಸ್ ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳಿಗೆ ಮಾಲೀಕರು ಪಾವತಿಸಿರುವ ಶಿಷ್ಯ ವೇತನ (Stipend) ಮರುಪಾವತಿ:--**

ಒಂದು ವರ್ಷದ ಅವಧಿಯ ಸಾಮಾನ್ಯ (Normal) ಹಾಗೂ ಎರಡು ವರ್ಷಗಳ ಅವಧಿಯ ಸಮಗ್ರ (Comprehensive) ಅಪ್ರೆಂಟಿಸ್ ತರಬೇತಿ ಪಡೆಯುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಅಪ್ರೆಂಟಿಸ್‌ಶಿಪ್ ಕಾಯ್ದೆ, 1961 ರನ್ವಯ ಮಾಲೀಕರು ಪಾವತಿಸಿದ ಮಾಸಿಕ ಶಿಷ್ಯವೇತನ (Stipend) ಮೊತ್ತದಲ್ಲಿ 2/3 ರಷ್ಟು ಮೊತ್ತವನ್ನು ಮಾಸಿಕ ತಲಾ ರೂ.5000/-- ಗಳ ಗರಿಷ್ಠ ಮಿತಿಯೊಳಗೆ ಮಾಲೀಕರಿಗೆ ಮರುಪಾವತಿಸಲಾಗುವುದು.

**(ಇ)ಅಪ್ರೆಂಟಿಸ್ ತರಬೇತಿ ನಂತರ ಅದೇ ಅಭ್ಯರ್ಥಿಯನ್ನು ಅದೇ ಮಾಲೀಕರು ಖಾಯಂ ಮಾಡಿದಲ್ಲಿ ವೇತನ ಮರುಪಾವತಿ:--**

ಅಪ್ರೆಂಟಿಸ್ ತರಬೇತಿ ಪಡೆದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳನ್ನೇ ಅದೇ ಮಾಲೀಕರು ನೇಮಕಾತಿ ಮಾಡಿಕೊಂಡಲ್ಲಿ, ಅಂತಹ ನೌಕರರಿಗೆ ಆಯಾ ಹುದ್ದೆಗಳಿಗೆ ಸರ್ಕಾರ ನಿಗದಿಪಡಿಸಿದ ಕನಿಷ್ಠ ವೇತನ ದರದಲ್ಲಿ ಶೇ.50 ರಷ್ಟು ಮೊತ್ತವನ್ನು ಮಾಸಿಕ ಗರಿಷ್ಠ ತಲಾ ರೂ. 7000/--ಗಳ ಮಿತಿಯೊಳಗೆ

| | | |
|---|---|---|
| | | ಉದ್ಯೋಗದಾತರಿಗೆ ಒಂದು ವರ್ಷದ ಅವಧಿಗೆ ಮರುಪಾವತಿ ಮಾಡಲಾಗುತ್ತದೆ.<br>**3] ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**<br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ವಂತಿಕೆ ಪಾವತಿಸುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಈ ಕೆಳಕಂಡ ಕಲ್ಯಾಣ ಯೋಜನೆಗಳು ಜಾರಿಯಲ್ಲಿರುತ್ತವೆ.<br>1. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ<br>2. ವೈದ್ಯಕೀಯ ನೆರವು.<br>3. ಅಪಘಾತ ಧನ ಸಹಾಯ.<br>4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.<br>5. ವಾರ್ಷಿಕ ವೈದ್ಯಕೀಯ ತಪಾಸಣೆ ಶಿಭಿರಕ್ಕೆ ಧನ ಸಹಾಯ.<br>6. ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕ ಸಂಘಟನೆಗೆ ಧನ ಸಹಾಯ |
| ಆ) | ರಾಜ್ಯದಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಸಂಸ್ಥೆಗಳಲ್ಲಿ ಕೆಲಸ ಮಾಡುವವರ ಕ್ಷೇಮಾಭಿವೃದ್ಧಿ ಕಾಯಿದೆ-1996ರ ಅಡಿ (Building and Others Construction Workers Welfare Cess Act, 1996) ಇದುವರೆವಿಗೂ ಸೆಸ್ ರೂಪದಲ್ಲಿ ಸಂಗ್ರಹವಾಗಿರುವ ಹಣವೆಷ್ಟು; (ಮಾಹಿತಿ ನೀಡುವುದು) | **ಮಂಡಳಿಯಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಸುಂಕ ಕಾಯ್ದೆ, 1996ರ** ಪ್ರಾವಧಾನಗಳಡಿ 2007 ರಿಂದ ಇದುವರೆವಿಗೂ ಸೆಸ್ ರೂಪದಲ್ಲಿ ಸಂಗ್ರಹವಾಗಿರುವ ಮೊತ್ತ **ರೂ.6493.69 ಕೋಟಿ.**<br>ವಿವರಗಳನ್ನು **ಅನುಬಂಧ-02** ರಲ್ಲಿ ಲಗತ್ತಿಸಿದೆ. |
| ಇ) | ಈ ಹಣವನ್ನು ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಕ್ಷೇಮಾಭಿವೃದ್ಧಿಗೆ ಬಳಸಲಾಗುತ್ತಿದೆಯೇ; | ಮಂಡಳಿಯಲ್ಲಿ ಸಂಗ್ರಹವಾದ ಸುಂಕದ ನಿಧಿಯನ್ನು ಅಸಂಘಟಿತ ವಲಯಕ್ಕೆ ಸೇರಿದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗೆ ಮಾತ್ರ ಬಳಕೆ ಮಾಡಬಹುದಾಗಿದೆ. ಈ ವರ್ಗದ ಕಾರ್ಮಿಕರಿಗಾಗಿ ರೂಪಿಸಲಾದ 19 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡಲು ಬಳಸಲಾಗುತ್ತಿದೆ. |

| | | |
|---|---|---|
| ಈ) | ಹಾಗಿದ್ದಲ್ಲಿ, ಯಾವ ಯಾವ ಯೋಜನೆಯಡಿಯಲ್ಲಿ (ಸ್ಕೀಮ್) ಈ ಹಣವನ್ನು ಬಳಸಲಾಗುತ್ತಿದೆ; (ಈ ಬಗ್ಗೆ ಯೋಜನಾವಾರು (ಸ್ಕೀಮ್) ವಿವರ ನೀಡುವುದು) | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ 19 ರೀತಿಯ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡಲು ಸೆಸ್ ಮೊತ್ತವನ್ನು ಬಳಸಲಾಗುತ್ತಿದೆ. ವಿವಿಧ ಸೌಲಭ್ಯವಾರು / ಯೋಜನಾವಾರು ವಿತರಿಸಿರುವ ಮೊತ್ತದ ಮಾಹಿತಿಯನ್ನು ಅನುಬಂಧ- 03 ರಲ್ಲಿ ನೀಡಿದೆ. |
| ಉ) | ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕ್ಷೇಮಾಭಿವೃದ್ಧಿ ಮಂಡಳಿಯನ್ನು (Karnataka Building and Other Construction Welfare Board) ಯಾವಾಗ ರಚನೆ ಮಾಡಲಾಗಿದೆ; (ಈ ಮಂಡಳಿಯಲ್ಲಿ ಇರುವ ಸದಸ್ಯರುಗಳ ವಿವರ ನೀಡುವುದು) ಮತ್ತು ಇದುವರೆವಿಗೂ ಈ ಮಂಡಳಿಯು ಎಷ್ಟು ಸಭೆಗಳನ್ನು ನಡೆಸಿ, ಕಾರ್ಮಿಕರ ಅಭಿವೃದ್ಧಿಗೆ ಯೋಜನಾವಾರು (ಸ್ಕೀಮ್‌ವಾರು)ಎಷ್ಟು ಹಣವನ್ನು ಬಿಡುಗಡೆ ಮಾಡಿದೆ ಹಾಗೂ ಅನುಷ್ಠಾನಗೊಳಿಸುವುದು ಎಷ್ಟು? | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯನ್ನು ದಿನಾಂಕ:18-01-2007 ರಂದು ರಚನೆ ಮಾಡಲಾಗಿರುತ್ತದೆ.<br>ಪ್ರಸ್ತುತ ಮಂಡಳಿಯ ಸದಸ್ಯರಾಗಿ ಸರ್ಕಾರದಿಂದ ನೇಮಕಗೊಂಡಿರುವ ಸದಸ್ಯರುಗಳ ವಿವರವನ್ನು ಅನುಬಂಧ-04 ರಲ್ಲಿ ಲಗತ್ತಿಸಿದೆ. ಮಂಡಳಿಯಲ್ಲಿ 2007 ರಿಂದ ಇಲ್ಲಿಯವರೆಗೆ ಒಟ್ಟು 28 ಸಭೆಗಳನ್ನು ನಡೆಸಲಾಗಿರುತ್ತದೆ. ಮಂಡಳಿಯು ರೂಪಿಸುವ ಯಾವುದೇ ಸೌಲಭ್ಯಗಳನ್ನು ಮಂಡಳಿಯ ಆಯಾ ಸಭೆಯಲ್ಲಿ ಮಂಡಿಸಿ, ನಿರ್ಣಯ ಕೈಗೊಂಡು, ಸರ್ಕಾರವು ಅಧಿಸೂಚನೆಯ ಹೊರಡಿಸಿದ ನಂತರ ಸೌಲಭ್ಯಗಳನ್ನು ಜಾರಿಮಾಡಲಾಗುತ್ತಿದೆ. ಇಲ್ಲಿಯವರೆಗೆ ಯೋಜನೆ / ಸೌಲಭ್ಯವಾರು ಬಿಡುಗಡೆ ಮಾಡಿರುವ ಮೊತ್ತದ ವಿವರವನ್ನು ಅನುಬಂಧ-03 ರಲ್ಲಿ ನೀಡಿದೆ. ಮಂಡಳಿಯು ಅನುಷ್ಠಾನಗೊಳಿಸಿರುವ ಸೌಲಭ್ಯಗಳ ವಿವರವನ್ನು ಅನುಬಂಧ-01 ರಲ್ಲಿ ಲಗತ್ತಿಸಿದೆ. |

ಇ-ಆಫೀಸ್ ಕಾಇ 69 ಎಲ್‌ಇಟಿ 2020

(ಅರಬೈಲ್ ಶಿವರಾಂ ಹೆಬ್ಬಾರ್)
ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

## ಅನುಬಂಧ-01

### ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ **60** ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ **ರೂ.2,000/-**
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1000/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/-** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ):** ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|
| | ಗಂಡು | ಹೆಣ್ಣು |
| ನರ್ಸರಿ | **3,000** | **4,000** |
| 1 ರಿಂದ 4ನೇ ತರಗತಿ | **3,000** | **4,000** |
| 5 ರಿಂದ 8ನೇ ತರಗತಿ | **5,000** | **6,000** |
| 9 ಹಾಗೂ 10ನೇ ತರಗತಿ | **10,000** | **11,000** |
| ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | **10,000** | **14,000** |
| ಐಟಿಐ | **12,000** | **15,000** |
| ಪದವಿ ಪ್ರತಿ ವರ್ಷಕ್ಕೆ | **15,000** | **20,000** |
| ಸ್ನಾತಕೋತ್ತರ ಪದವಿ ಸೇರ್ಪಡೆಗೆ | **20,000** | **20,000** |
| ಪ್ರತಿ ವರ್ಷಕ್ಕೆ | **20,000** | **25,000** |
| ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | **25,000** | **25,000** |
| ಪ್ರತಿ ವರ್ಷಕ್ಕೆ | **25,000** | **30,000** |
| ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | **30,000** | **30,000** |
| ಪ್ರತಿ ವರ್ಷಕ್ಕೆ | **40,000** | **50,000** |

| | | |
|---|---|---|
| ಡಿಪ್ಲೋಮಾ | **15,000** | **20,000** |
| ಎಂ.ಟೆಕ್ / ಎಂ.ಇ | **30,000** | **35,000** |
| ಎಂ.ಡಿ (ವೈದ್ಯಕೀಯ) | **45,000** | **55,000** |
| ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | **25,000** | **30,000** |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-**ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ

## ಅನುಬಂಧ-02

### ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ಸಂಗ್ರಹಿಸಲಾದ ಸುಂಕದ ವರ್ಷವಾರು ವಿವರ

| ಕ್ರ. ಸಂ | ವರ್ಷ | ಸುಂಕ ಸಂಗ್ರಹಣೆ (ರೂ.ಕೋಟಿಗಳಲ್ಲಿ) |
|---|---|---|
| 1 | 2006–07 | - |
| 2 | 2007–08 | 450.25 |
| 3 | 2008–09 | 164.93 |
| 4 | 2009–10 | 227.56 |
| 5 | 2010–11 | 325.20 |
| 6 | 2011–12 | 360.61 |
| 7 | 2012–13 | 483.58 |
| 8 | 2013–14 | 480.87 |
| 9 | 2014–15 | 656.06 |
| 10 | 2015–16 | 621.11 |
| 11 | 2016–17 | 709.25 |
| 12 | 2017–18 | 769.93 |
| 13 | 2018–19 | 868.53 |
| 14 | 2019–20 (ಜನವರಿ) | 780.98 |
| ಒಟ್ಟು | | **6493.69** |

**ಅನುಬಂಧ-03**

**2007 ರಿಂದ ಜನವರಿ-2020 ರವರೆಗೆ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕ ಕಲ್ಯಾಣ ಮಂಡಳಿ ವತಿಯಿಂದ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿಯಲ್ಲಿ ವಿತರಿಸಲಾದ ಸಹಾಯಧನದ ವಿವರಗಳು**

| ಕ್ರಮ ಸಂಖ್ಯೆ | ಸೌಲಭ್ಯಗಳ ವಿವರ | ಫಲಾನುಭವಿಗಳ ಸಂಖ್ಯೆ | ಸಹಾಯ ಧನ ವಿತರಿಸಿದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| 1 | ಶೈಕ್ಷಣಿಕ ಧನಸಹಾಯ | 3,95,652 | 19,340 |
| 2 | ಮದುವೆ ಧನಸಹಾಯ | 42,796 | 19,387 |
| 3 | ಅಂತ್ಯ ಸಂಸ್ಕಾರಕ್ಕೆ ವೆಚ್ಚ | 11,534 | 5,533 |
| 4 | ಪ್ರಮುಖ ವೈದ್ಯಕೀಯ ವೆಚ್ಚ | 5,627 | 956 |
| 5 | ಅಪಘಾತ ಪರಿಹಾರ | 503 | 740 |
| 6 | ಹೆರಿಗೆ ಧನಸಹಾಯ | 2,925 | 421 |
| 7 | ವೈದ್ಯಕೀಯ ವೆಚ್ಚ | 1,259 | 71 |
| 8 | ಉಪಕರಣ ಖರೀದಿಗೆ ಸಾಲ | 20 | 0.09 |
| 9 | ಪಿಂಚಣಿ ಸೌಲಭ್ಯ | 1,704 | 367 |
| 10 | ದುರ್ಬಲತೆ ಪಿಂಚಣಿ | 29 | 47 |
| 11 | ಅನಿಲ ಭಾಗ್ಯ | 0 | 6,600 |
| 12 | ಶ್ರಮ ಸಾಮರ್ಥ್ಯ | 5712 | 2,311 |
| 13 | ಬಿಎಂಟಿಸಿ ಬಸ್ ಪಾಸ್ | 2519 | 524 |
| 14 | ವಸತಿ ಸೌಲಭ್ಯ | 0 | 7,600 |
| 15 | ಶಿಶು ಪಾಲನಾ ಕೇಂದ್ರಗಳ ಸ್ಥಾಪನೆ | 459 | 30 |
| 16 | ಕ್ಲೈಂ ಅರ್ಜಿಗಳ ಮಂಜೂರಾತಿಗಾಗಿ ಮುಂಗಡ ಬಿಡುಗಡೆ | 0 | 961 |
| ಒಟ್ಟು | | **4,70,739** | **64,864** |

*ಕ್ರಮ ಸಂಖ್ಯೆ 11, 14 ಮತ್ತು 16 ರ ಸೌಲಭ್ಯಗಳಲ್ಲಿ ಮುಂಗಡವಾಗಿ ಸಂಬಂಧಪಟ್ಟ ಇಲಾಖೆಗಳ / ಸಂಸ್ಥೆಗಳಿಗೆ ಹಣ ಬಿಡುಗಡೆ ಮಾಡಿರುವುದರಿಂದ ಫಲಾನುಭವಿಗಳ ಸಂಖ್ಯೆ ಲಭ್ಯವಿರುವುದಿಲ್ಲ